

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 109 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 21-09-2020 |
| 4) | ಉತ್ತರಿಸುವವರು | **ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.** |

| ಪ್ರಶ್ನೆ | ಉತ್ತರ |
|---|---|
| (ಅ) ಸರ್ಕಾರವು ನಿರುದ್ಯೋಗಿಗಳನ್ನು ಉದ್ಯೋಗಿಗಳನ್ನಾಗಿ ಮಾಡಲು ಜಾರಿಗೆ ತಂದ ಕೌಶಲ್ಯಾಭಿವೃದ್ಧಿ ಯೋಜನೆಗಳಾವುವು; | **ಕೌಶಲ್ಯ ಮಿಷನ್ :** ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಡಿ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ (**ಸಿಎಂಕೆಕೆವೈ**) ಮತ್ತು ಪ್ರಧಾನ ಮಂತ್ರಿಗಳ ಕೌಶಲ್ಯ ವಿಕಾಸ್ ಯೋಜನೆಗಳನ್ನು (**ಪಿಎಂಕೆವಿವೈ**) ಜಾರಿಗೊಳಿಸಲಾಗಿದ್ದು, ಈ ಯೋಜನೆಗಳಡಿ ರಾಜ್ಯದ ನಿರುದ್ಯೋಗ ಯುವಕ-ಯುವತಿಯರಿಗೆ ಕೌಶಲ್ಯ ತರಬೇತಿಗಳನ್ನು ನೀಡುವುದರ ಮುಖಾಂತರ ಶೇ 70% ರಷ್ಟು ಉದ್ಯೋಗ ಅವಕಾಶಗಳನ್ನು ಕಲ್ಪಿಸಲಾಗುತ್ತದೆ.<br><br>**ಡೇ-ನಲ್ಮ್: ಸಾಮಾಜಿಕ ಕ್ರೋಢೀಕರಣ ಮತ್ತು ಸಾಂಸ್ಥಿಕ ಅಭಿವೃದ್ಧಿ :**<br>➢ ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳನಿಯುಕ್ತಿ<br>➢ ಸ್ವಯಂ ಉದ್ಯೋಗ ಯೋಜನೆ (ವೈಯಕ್ತಿಕ ಹಾಗೂ ಗುಂಪು)<br><br>**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):** ಸಂಜೀವಿನಿ – ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆಯ ಮೂಲಕ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಈ ಕೆಳಕಂಡಂತಿವೆ.<br>➢ ದೀನ್ ದಯಾಳ್ ಉಪಾಧ್ಯಾಯ ಗ್ರಾಮೀಣ ಕೌಶಲ್ಯ ಯೋಜನೆಯಡಿ ವಿವಿಧ ಕೌಶಲ್ಯಗಳ ಉಚಿತ ತರಬೇತಿ, ಊಟ, ವಸತಿ ಸೌಲಭ್ಯಗಳನ್ನು ನೀಡಿ ಶೇಕಡಾ 70 ರಷ್ಟು ಮಂದಿಗೆ ಉದ್ಯೋಗಾವಕಾಶಗಳನ್ನು ದೊರಕಿಸುವುದು.<br>➢ ಗ್ರಾಮೀಣ ಸ್ವಉದ್ಯೋಗ ತರಬೇತಿ ಕೇಂದ್ರ – ಆರ್‌ಸೆಟಿ ಕಾರ್ಯಕ್ರಮದಡಿ ತರಬೇತಿ ನೀಡಿ ಸ್ವಉದ್ಯೋಗ ಸಂಬಂಧ ಆರ್ಥಿಕ ನೆರವುದೊರಕಿಸುವ ಮುಖೇನ ಪ್ರೋತ್ಸಾಹಿಸುವುದು.<br><br>**ಸಿಡಾಕ್:** ಸಂಸ್ಥೆಯಿಂದ ಉದ್ಯಮಶೀಲತಾ ತಿಳುವಳಿಕೆ ಕಾರ್ಯಕ್ರಮ ಹಾಗೂ ಉದ್ಯಮಶೀಲತಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಕೌಶಲ್ಯ ಉದ್ಯೋಗ ಯೋಜನೆಯಡಿಯಲ್ಲಿ ಸ್ವಾವಲಂಬಿಯಾಗಲು ಮತ್ತು ಸ್ವಂತ ಬಂಡವಾಳದೊಂದಿಗೆ ಉದ್ದಿಮೆಯನ್ನು ಸ್ಥಾಪನೆ ಮಾಡಲು ಉದ್ಯಮಶೀಲತಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ಸಿಡಾಕ್ ಸಂಸ್ಥೆಯಿಂದ ಹಮ್ಮಿಕೊಳ್ಳಲಾಗುತ್ತಿದೆ. |
| (ಆ) ಎಷ್ಟು ಜನ ನಿರುದ್ಯೋಗಿಗಳಿಗೆ ತರಬೇತಿ ನೀಡಲಾಗಿದೆ. | 2019-20 ನೇ ಸಾಲಿನಲ್ಲಿ ತರಬೇತಿ ನೀಡಲಾದ ಅಭ್ಯರ್ಥಿಗಳ ವಿವರ (see table below) |

| ಇಲಾಖೆ / ಸಂಸ್ಥೆ | ತರಬೇತಿ ಪಡೆದ ಫಲಾನುಭವಿಗಳ ಸಂಖ್ಯೆ |
|---|---|
| ಕೌಶಲ್ಯ ಮಿಷನ್ (ಸಿ.ಎಂ.ಕೆ.ಕ.ವೈ & ಪಿ.ಎಂ.ಕೆ.ವಿ.ವೈ.) | 61065 |
| ಡೇ-ನಲ್ಮ್ | 6792 |
| **ಎನ್.ಆರ್.ಎಲ್.ಎಂ.** | |
| ಡಿಡಿಯುಜಿಕೆವೈ | 5131 |
| ಆರ್‌ಸೆಟಿ | 21586 |
| ಸಿಡಾಕ್ | 23016 |

| | |
|---|---|
| | ಸಿ.ಎಂ.ಕೆ.ಕೆ.ವೈ. ಅಲ್ಲದೆ **ಜಿಟಿಟಿಸಿ** ಸಂಸ್ಥೆಯಿಂದ 2019-20ನೇ ಸಾಲಿನಲ್ಲಿ ವಿವಿಧ ಕೋರ್ಸ್‌ಗಳಲ್ಲಿ 844 ಅಭ್ಯರ್ಥಿಗಳಿಗೆ ದೀರ್ಘಾವಧಿ ಕೌಶಲ್ಯ ತರಬೇತಿ ನೀಡಲಾಗಿದೆ ಹಾಗೂ **ಕೆ.ಜಿ.ಟಿ.ಟಿ.ಐ.** ಸಂಸ್ಥೆಯಿಂದ ವಿವಿಧ ಕೋರ್ಸ್‌ಗಳಲ್ಲಿ 1676 ಅಭ್ಯರ್ಥಿಗಳಿಗೆ ಅಲ್ಪಾವಧಿ ಕೌಶಲ್ಯ ತರಬೇತಿ ನೀಡಲಾಗಿದೆ. |
| (ಇ) ಕೌಶಲ್ಯಾಭಿವೃದ್ಧಿ ಯೋಜನೆಗಳಿಂದ ಎಷ್ಟು ಜನ ನಿರುದ್ಯೋಗಿಗಳು ಉದ್ಯೋಗವನ್ನು ಪಡೆದಿದ್ದಾರೆ? (ವಿವರ ನೀಡುವುದು) | 2019-20 ನೇ ಸಾಲಿನಲ್ಲಿ ತರಬೇತಿ ನಂತರ ಉದ್ಯೋಗ ನಿಯುಕ್ತಿಗೊಳಿಸಿದ ವಿವರಗಳು. |

| ಇಲಾಖೆ / ಸಂಸ್ಥೆ | ತರಬೇತಿ ಪಡೆದ ನಂತರ ಉದ್ಯೋಗ ನಿಯುಕ್ತಿ ಪಲಾನುಭವಿಗಳ ಸಂಖ್ಯೆ |
|---|---|
| ಕೌಶಲ್ಯ ಮಿಷನ್ (ಸಿ.ಎಂ.ಕೆ.ಕ.ವೈ & ಪಿ.ಎಂ.ಕೆ.ವಿ.ವೈ.) | 13988 |
| ಡೇ-ನಲ್ಮ್ | 185 |
| ಎನ್.ಆರ್.ಎಲ್.ಎಂ.<br>ಡಿಡಿಯುಜಿಕೆವೈ<br>ಆರ್‌ಸೆಟಿ | 7048<br>0 |
| ಸಿಡಾಕ್ | 785 |

ಸಿ.ಎಂ.ಕೆ.ಕೆ.ವೈ. ಅಲ್ಲದೆ **ಜಿಟಿಟಿಸಿ** ಸಂಸ್ಥೆಯಿಂದ 2019-20ನೇ ಸಾಲಿನಲ್ಲಿ ವಿವಿಧ ಕೋರ್ಸ್‌ಗಳಲ್ಲಿ 654 ಅಭ್ಯರ್ಥಿಗಳಿಗೆ ದೀರ್ಘಾವಧಿ ಕೌಶಲ್ಯ ತರಬೇತಿ ನೀಡಲಾಗಿದೆ ಹಾಗೂ **ಕೆ.ಜಿ.ಟಿ.ಟಿ.ಐ.** ಸಂಸ್ಥೆಯಿಂದ ವಿವಿಧ ಕೋರ್ಸ್‌ಗಳಲ್ಲಿ 205 ಅಭ್ಯರ್ಥಿಗಳಿಗೆ ಅಲ್ಪಾವಧಿ ಕೌಶಲ್ಯ ತರಬೇತಿ ನೀಡಲಾಗಿದೆ.

**ಸಂಖ್ಯೆ: ಕೌಉಜೀಇ 31 ಉಜೀಪ್ರ 2020**

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
**ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,**
**ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ**
**ಮತ್ತು ಜೀವನೋಪಾಯ ಸಚಿವರು.**